# ಬಾಲ್ಯವಿವಾಹಪ್ರಕರಣಂ.



ಭೋ. ಭೋ. ಆರ್ಯಶಿರೋಮಣಯಃ,

ಗುಣೈಕಪಕ್ಷಪಾತಿಗಳಾದ ನಮ್ಮ ಆರ್ಯರ ಸನ್ನಿಧಿಯಲ್ಲಿ ಬಾಲ್ಯವಿವಾಹ ವಿಷಯವಾಗಿ ಕೆಲವು ಅಂಶಗಳನ್ನು ವಿಜ್ಞಾಪನೆ ಮಾಡಿಕೊಳ್ಳಬೇಕೆಂದು ಉದ್ಯುಕ್ತನಾಗಿರುವ ನನ್ನ ವಿಜ್ಞಾಪನೆಯನ್ನು ಸಾವಧಾನಮನಸ್ಕರಾಗಿ ಕೇಳಬೇಕೆಂಬುವದೇ ನನ್ನ ಪ್ರಾರ್ಥನಾ.

ಪ್ರಜಾಪ್ರತಿನಿಧಿಸಭೆಯು ಬಾಲ್ಯವಿವಾಹದಿಂದುಂಟಾಗಿರುವ ಅನರ್ಥಗಳನ್ನು ನಿಲ್ಲಿಸಿ, ನಮ್ಮಗಳಿಗೆ ಕ್ಷೇಮವನ್ನುಂಟುಮಾಡಬೇಕೆಂದು ಕೇಳಿಕೊಂಡದ್ದರಿಂದ, ಇದಕ್ಕಾಗಿ ಪರಮದಯಾಳುಗಳಾದ ನಮ್ಮ ಗೌರ್ನಮೆಂಟಿನವರು ಏರ್ಪಡಿಸಿರುವ ಮುಖ್ಯಾಂಶಗಳು,—೮ ವರ್ಷಗಳ ಮೇಲ್ಪಟ್ಟ ಸ್ತ್ರೀಯರಿಗೆ ವಿವಾಹ ಮಾಡಬೇಕೆಂದೂನೂ, ೧೪ ವರ್ಷಗಳ ಮೇಲ್ಪಟ್ಟ ಪುರುಷರಿಗೆ ವಿವಾಹ ಮಾಡಬೇಕೆಂದೂನೂ,

೫೧ ವರ್ಷಗಳ ಮೇಲೆ ಪುರುಷರು ವಿವಾಹ ಮಾಡಿಕೊಳ್ಳಕೂಡದೆಂತಲೂ, ೫೦ ವರ್ಷದವನು ವಿವಾಹ ಮಾಡಿಕೊಳ್ಳಬೇಕಾದರೆ ೧೪ ವರ್ಷಕ್ಕೆ ಮೇಲ್ಪಟ್ಟ ಸ್ತ್ರೀಯನ್ನು ವಿವಾಹ ಮಾಡಿಕೊಳ್ಳಬಹುದೆಂತಲೂ ಏರ್ಪಡಿಸಿರುವದು ಯೆಲ್ಲರಿಗೂ ಗೊತ್ತೇಇಧೆಯಷ್ಟೆ.

ಆದರೆ ಬಹಳ ದಿವಸಗಳಿಂದ ಗೌರ್ನಮೆಂಟಿನವರು ಇಂಥಾ ವಿಷಯಗಳಲ್ಲಿ ಪ್ರಯತ್ನಿಸದೆ ಉದಾಸೀನರಾಗಿದ್ದದ್ದರಿಂದಲೇ, ಪ್ರಜೆಗಳಿಗೆ ಅನೇಕವಿಧ ಕಷ್ಟಗಳು ಪ್ರಾಪ್ತವಾಗುತ್ತಾಬಂತು. ಈ ಅನರ್ಥಗಳೆಲ್ಲಾ ನಮ್ಮ ಪ್ರಜೆಗಳಿಗೆ ಉಂಟಾಗಬಾರದೆಂದು ಯೋಚಿಸಿ, ಎಲ್ಲಾ ಭಾಗಗಳಲ್ಲಿಯೂ ಪ್ರಜೆಗಳಾದ ನಮ್ಮಗಳನ್ನು ಒಳ್ಳೇಸ್ಥಿತಿಯಲ್ಲಿಟ್ಟು ನಷ್ಟವಾಗಿರುವ ಆರ್ಯಧರ್ಮಗಳೆಲ್ಲವನ್ನು ಸ್ಥಿರಪಡಿಸಬೇಕೆಂದು ಉದ್ಯುಕ್ತರಾಗಿರುವ ನಮ್ಮ ಮಹಾರಾಜರ ಪ್ರಯತ್ನವನ್ನು ಕೇಳಿ ನಾವುಗಳು ಅತ್ಯಧಿಕವಾದ ಆನಂದವನ್ನು ಹೊಂದಬೇಕಾಗಿಧೆ.

ಪ್ರಭುಗಳಿಗೆ ಯಥಾಶಾಸ್ತ್ರವಾಗಿ ಪ್ರಜಾಪರಿಪಾಲನೆಮಾಡುವದೇ ಮುಖ್ಯವಾದ ಸ್ವಧರ್ಮವಾಗಿಧೆ.

ಹ್ಯಾಗಂದರೆ:

ಶ್ಲೋ॥ ಮನುಃ ॥ ರಕ್ಷಣಾದಾರ್ಯವೃತ್ತಾನಾಂ
ಕಂಟಕಾನಾಂಚಶೋಧನಾತ್ । ನರೇಂದ್ರಾ
ಸ್ತ್ರಿದಿವಂಯಾಂತಿ ಪ್ರಜಾಪಾಲನತತ್ಪರಾಃ ॥

ಆರ್ಯಧರ್ಮಗಳನ್ನು ಸ್ಥಾಪಿಸುತ್ತಲೂ, ಅಧರ್ಮಗಳನ್ನು ಶುದ್ಧಾಂಗವಾಗಿ ಹೋಗಲಾಡಿಸುತ್ತಲೂ, ಪ್ರಜೆಗಳನ್ನು ಕಾಪಾಡುವದೇ ರಾಜರಿಗೆ ಸ್ವಧರ್ಮವೆಂದು ಶ್ಲೋಕಾಭಿಪ್ರಾಯವು.

ಸಮಸ್ತ ಅಧರ್ಮಗಳು ನಡೆಯಲು ಯುಗಧರ್ಮ ಕಾರಣವೇ ಹೊರತು ರಾಜಧರ್ಮಗಳು ಕಾರಣವಲ್ಲವೆಂದು ಎಂದಿಗೂ ಹೇಳಲು ಆಗಲಾರದು.

ಹ್ಯಾಗಂದರೆ:

ಶ್ಲೋ॥ಮನುಃ ॥ ಕೃತಂತ್ರೇತಾಯುಗಂಚೈವದ್ವಾ
ಪರಂಕಲಿರೇವಚ । ರಾಜ್ಞೋವೃತ್ತಾನಿಸ
ರ್ವಾಣಿರಾಜಾಹಿಯುಗಮುಚ್ಯತೇ ॥

ನಾಲ್ಕು ಯುಗಗಳೂ ಕೂಡ ಆಯಾಯ ಕಾಲಗಳಲ್ಲಿ ರಾಜ್ಯಪರಿಪಾಲನೆ ಮಾಡುವ ರಾಜನ ಧರ್ಮಗಳನ್ನನುಸರಿಸಿರುವವೇ ಹೊರ್ತು ರಾಜರನ್ನು ಅತಿಕ್ರಮಿಸಿ ಯುಗಧರ್ಮಗಳಿಲ್ಲವೆಂದು ಶ್ಲೋಕಾರ್ಥವು. ಇದಕ್ಕೆ "ರಾಜಾಕಾಲಸ್ಯ ಕಾರಣಂ" ಎಂಬದಾಗಿ ಪ್ರಮಾಣಾಂತರವೂ ಉಂಟು. ಆದಕಾರಣ ರಾಜರನ್ನು ಅತಿಕ್ರಮಿಸಿ ಯಾವ ಅಧರ್ಮವೂ ಲೋಕದಲ್ಲಿ ನಡೆಯಲಾರದು. ಎಲ್ಲಾ ವಿಷಯಗಳಿಗೂ ರಾಜರೇ ಮುಖ್ಯಕಾರಣರಾಗಿರುತ್ತಾರೆ. ಆದಕಾರಣ ತಮ್ಮ ದೇಶದಲ್ಲಿ ಎಲ್ಲಾ ವಿಷಯಗಳಲ್ಲಿಯೂ ಪ್ರವರ್ತಿಸಿ ಧರ್ಮವಾಗಿ ಪ್ರಜಾಪರಿಪಾಲನೆ ಮಾಡುವದೇ ಅವರ ಸ್ವಧರ್ಮವಾಗಿ ಇದೆ ಎಂದು ಹೇಳಬಹುದು: ಆದರೆ—

(೧) ಬಾಲ್ಯವಿವಾಹ ನಿರೋಧನ ವಿಷಯದಲ್ಲಿ ಉದ್ಯುಕ್ತರಾಗಿರುವ ಮಹಾರಾಜರ ತಾತ್ಪರ್ಯವೇನು ?

(೨) ಈ ನಿರ್ಬಂಧವಿಲ್ಲದೇ ಇರುವದರಿಂದ ಪ್ರಜೆಗಳಿಗೆ ಉಂಟಾಗಿರುವ ಅನರ್ಥಗಳೇನು ?

(೩) ಈ ನಿರ್ಬಂಧ ಉಂಟುಮಾಡುವದ್ದರಿಂದ ಪ್ರಜೆಗಳಾದ ನಮ್ಮಗಳಿಗೆ ಮುಂದೆ ಉಂಟಾಗುವ ಅನುಕೂ

ಲಗಳೇನು ? ಎಂದು ಈ ೩ ಅಂಶಗಳನ್ನು ನಾವು
ಗಳು ಅತ್ಯಾವಶ್ಯಕವಾಗಿ ವಿಚಾರ ಮಾಡಬೇಕಾಗಿದೆ.

ಮಹಾರಾಜರ ತಾತ್ಪರ್ಯವೇನಂದರೆ:

ಬಾಲ್ಯದಲ್ಲಿಯೇ ಸ್ತ್ರೀಯರಿಗೆ ವೈಧವ್ಯಪ್ರಾಪ್ತಿಯಾಗುವಿಕೆ, ಇದೇ ಪ್ರಕಾರವಾಗಿ ಪುರುಷರಿಗೆ ಪತ್ನೀವಿಯೋಗದಿಂದುಂಟಾಗುವ ಅನೇಕ ಅನರ್ಥಗಳು.

ತಮ್ಮ ಮಕ್ಕಳ ಯೋಗಕ್ಷೇಮವನ್ನು ಆಲೋಚನೆ ಮಾಡದೆ ಕೇವಲ ದ್ರವ್ಯಾಸಕ್ತರಾದ ತಾಯಿತಂದೆಗಳ ಅಜಾಗರೂಕತೆಯಿಂದ ಪರಸ್ಪರ ಅನುರೂಪಗಳಾದವರ ಸಾಮ್ಯಗಳು ದೊರೆಯದೆ, ನಂತರ ಇದರಿಂದುಂಟಾಗುವ ಸಂಸಾರ ವಿಘಟನರೂಪಗಳಾದ ಅನರ್ಥಗಳು.

ಮತ್ತು ದುರ್ಬಲರಾಗಿಯೂ, ಆದ್ದರಿಂದಲೇ ಅಲ್ಪಾಯುಷ್ಕರಾಗಿಯೂ, ಆದ್ದರಿಂದಲೇ ಬುದ್ಧಿಹೀನರಾಗಿಯೂ ಇರುವ ಪ್ರಜೆಗಳು ಹುಟ್ಟುವದ್ದರಿಂದುಂಟಾಗುವ ದೇಶದ ಅನರ್ಥಗಳು, ಇವೇ ಮೊದಲಾದ ಪ್ರಜೆಗಳ ಅನಾನುಕೂಲಗಳನ್ನೆಲ್ಲಾ ನಿಲ್ಲಿಸಬೇಕೆಂಬುವದೇ ಮಹಾರಾಜರವರ ತಾ

ತ್ಪರ್ಯವಾಗಿರುತ್ತೆ. ಬಾಲ್ಯವಿವಾಹ ನಿರ್ಬಂಧವಿಲ್ಲದೇ ಇರು ವದ್ದರಿಂದ ಉಂಟಾಗುವ ಅನರ್ಥಗಳು ಯಾವವೆಂದರೆ:— ಜನನಕಾಲ ಮೊದಲ್ಗೊಂಡು ೧೬ ವರುಷಗಳ ಪರ್ಯಂತರ ವೂ ಪುರುಷನಿಗೆ ಪ್ರಬಲತಮವಾದ ಗಂಡಗಳು ಇರುವದ್ದ ರಿಂದಲೂ, ಇದೇ ಪ್ರಕಾರವಾಗಿ ಸ್ತ್ರೀಯರಿಗೆ ೧೦ ವರುಷ ಗಳ ಪರ್ಯಂತರವೂ ಗಂಡಕಾಲಗಳಿರುವದ್ದರಿಂದಲೂ, ಈ ಕಾಲಗಳು ಅತಿಕ್ರಮಿಸುವವರಿವಿಗೂ ಇವರುಗಳ ಜೀವಿಸುವಿ ಕೆಯು ಶಾಸ್ತ್ರಸಮ್ಮತವಾಗಿ ನಂಬಲು ಆಗಲಾರದಷ್ಟು ಕಾ ರಣಾಂತರಗಳು ಜ್ಯೋತಿಷ ಮತ್ತು ವೈದ್ಯಶಾಸ್ತ್ರಗಳಿಂದ ನಮ್ಮಗಳಿಗೆ ತಿಳಿಯಬರುತ್ತೆಯಷ್ಟೆ. ಇದಲ್ಲದೆ ಈ ವಯ ಸ್ಕರೇ ಪ್ರಬಲವಾಗಿ ಸಾಯುವದನ್ನು ನೋಡುತಾ ಮತ್ತು ಕೇಳುತಾ ಇರುವದೇ ನಮ್ಮಗಳಿಗೆ ದೃಷ್ಟಾಂತವಾಗಿಧೆ. ಮತ್ತು ಅನೇಕ ರೋಗಾದ್ಯುಪದ್ರಗಳು ಈ ವಯಸ್ಕರಿಗೆ ಪ್ರಾಪ್ತವಾಗಿ ಸಾಯುತಾ ಇರುವದೇ ನಮ್ಮಗಳಿಗೆ ದೃ ಷ್ಟಾಂತವಾಗಿ ಕಾಣುತಾ ಇಧೆ. ಆದ್ದರಿಂದಲೇ ಈ ವಯ ಸ್ಕರಾದ ಸ್ತ್ರೀಪುರುಷರಿಗೆ ವಿವಾಹಮಾಡುವದ್ದರಿಂದ ಲೇ ಬಾಲ ವಿಧವೆಯರು ಪ್ರಬಲರಾಗುವದಕ್ಕೆ ಮಾರ್ಗವಾ

ಯಿತು ಎಂದು ಹೇಳಬಹುದು. ಮತ್ತು ಬಾಲ್ಯದಲ್ಲಿ ಪುರುಷರಿಗೆ ಪತ್ನೀವಿಯೋಗದಿಂದುಂಟಾಗುವ ಅನರ್ಥಗಳಿಗೆ ಬಾಲ್ಯವಿವಾಹವೇ ಕಾರಣವಾಗಿಧೆ.

ಮತ್ತು ದರಿದ್ರರಾದವರು ದ್ರವ್ಯಾಕಾಂಕ್ಷಿಗಳಾಗಿ ಅಜ್ಞಾನಾವಸ್ಥೆಯಲ್ಲಿರುವ ತಮ್ಮ ಬಾಲಕಿಯರ ಕ್ಷೇಮ ಚಿಂತನೆಯನ್ನು ಮಾಡದೆ, ರೋಗಾದ್ಯುಪದ್ರಗಳಿಂದ ಪೀಡಿತರಾಗಿರುವಂಥಾ ಮತ್ತು ಅಶಕ್ತರಾದ ೫೦—೬೦ ವರ್ಷಗಳ ಮನುಷ್ಯರಿಗೆ ಬಹಳ ಆದರದಿಂದ ತಮ್ಮಗಳಿಂದ ಪೋಷಿತರಾದ ಬಾಲಕಿಯರನ್ನು ಪಾಪಿಷ್ಠರಾದ ಕೆಲವು ಶೂದ್ರರು ಶಕ್ತಿಇಲ್ಲದ ಮತ್ತು ತಮ್ಮಗಳ ವ್ಯವಸಾಯಕ್ಕೆ ಉಪಯೋಗಿಸದೆ ಇರುವ ದನಗಳನ್ನು ಕಟುಕರಿಗೆ ಕೊಡುವಹಾಗೆ ವಿವಾಹಮಾಡಿ ಒಡನೆ ವಿಧವೆಯರಾದವರನ್ನು ಕಣ್ಣಿನಿಂದ ನೋಡಿ ದುಃಖಪಡುತ್ತಾ ಇರುವವರನ್ನು ನಾವುಗಳು ದೃಷ್ಟಾಂತವಾಗಿ ನೋಡುತ್ತಾ ಇಧೇವೆ.

ಮತ್ತು ಅಜ್ಞ್ಯರಾದ ಕೆಲವರು, ಬಾಧ್ಯಗಳು ಬಿಟ್ಟು ಹೋಗುತ್ತವೆಂದು ಸುಂದರರಾದ ಬಾಲಕಿಯರನ್ನು ಕುಂಟರಿಗೂ, ಕುರುಡರಿಗೂ, ಯಳವರಿಗೂ, ಹುಚ್ಚರಿಗೂ, ಜನ್ಮ

ಸಹೀನರಿಗೂ, ವಿದ್ಯಾವಿಹೀನರಿಗೂ, ಕೊಟ್ಟಿರುವದನ್ನೂ ಕೊಡುತ್ತಾ ಇರುವದನ್ನೂ ನಾವುಗಳು ನೋಡುತ್ತಾ ಇದೇವೆ. ಇದಕ್ಕೆಲ್ಲಾ ಬಾಲ್ಯಾವಸ್ಥೆಯಲ್ಲಿರುವ ಮತ್ತು ಉತ್ತರೋತ್ತರ ತಮ್ಮಗಳಿಗೆ ಈ ವಿವಾಹದಿಂದುಂಟಾಗುವ ಅನರ್ಥಗಳನ್ನು ಸ್ವತಃ ಯೋಚಿಸಲು ಅಸಮರ್ಥರಾದ ಬಾಲಕಿಯರಿಗೆ ಕೇವಲ ಬಾಲ್ಯವಯಸ್ಸಿನಲ್ಲಿಯೇ ವಿವಾಹಮಾಡುವದು ಅನೇಕ ಅನರ್ಥಗಳು ಸಂಭವಿಸುವದಕ್ಕೆ ಮುಖ್ಯಕಾರಣವಾಗಿರುತ್ತೆಂದು ಹೇಳಬಹುದು.

ಇದೇ ಪ್ರಕಾರ ಬಾಲರಿಗೆ ತಾಯಿತಂದೆಗಳು ಬೋಧಮಾಡಿ ಬಾಲ್ಯದಲ್ಲಿ ಕುರೂಪಿಗಳಾದ ಸ್ತ್ರೀಯರನ್ನು ದ್ರವ್ಯಸಾಲಭ್ಯದಿಂದ ವಿವಾಹವಾಗುವದ್ದರಿಂದಲೂ, ಮತ್ತು ಬಾಧ್ಯಗಳು ಬಿಟ್ಟುಹೋಗಬಾರದೆಂತಲೂ ಬಲಾತ್ಕಾರವಾಗಿ ವಿವಾಹಮಾಡಿ, ಅವರು ಸ್ವತಂತ್ರರಾದಮೇಲೆ, ಆ ಕುರೂಪಿಗಳಾದ ಸ್ತ್ರೀಯರಲ್ಲಿ ಅನಾದರದಿಂದ ದುಷ್ಕಾರ್ಯಪ್ರವರ್ತಕರಾಗಿಯೂ, ಮತ್ತು ಪುನಃ ಮತ್ತೆ ಇಬ್ಬರನ್ನು ವಿವಾಹಿತರಾಗಿರುವದನ್ನು ಮತ್ತು ಸರಕ್ಕಾರನಿರ್ಬಂಧಗಳಿಂದ ಜೀವನಾಂಶ ಕೊಡುತ್ತಾ ಇರುವಂಥಾವರನ್ನು

ನಾವುಗಳು ನೋಡುತ್ತಾ ಇದ್ದೇವೆ. ಇವೇ ಮೊದಲಾದ ಕಾ ರಣಗಳಿಂದಲೆ ಪ್ರಪಂಚದಲ್ಲಿ ಅನೇಕವಿಧವಾದ ಸಂಸಾರ ವಿಘಟನೆಗಳುಂಟಾಗಿರುವದನ್ನು ನೋಡುತ್ತಾ ಇದ್ದೇವೆ.

ಅಥವಾ ಮೇಲೆ ಹೇಳಿದ ಪ್ರಕಾರ ಬಾಲ್ಯದಲ್ಲಿ ವಿವಾ ಹಿತರಾದ ದಂಪತಿಗಳು ದೈವಾನುಗ್ರಹದಿಂದ ವರಸಾಮ್ಯಗ ಳಿರುವದರಿಂದಲಾಗಲಿ, ಮತ್ತು ಹಿರಿಯರು ಮಾಡಿದ ಕೆಲ ಸವನ್ನು ನಾವುಗಳು ತಿರಸ್ಕರಿಸಬಾರದೆಂದಾಗಲಿ, ಅಥ ವಾ ಅನ್ಯಥಾ ಮತ್ತೊಂದು ವಿವಾಹ ಮಾಡಿಕೊಳ್ಳುವದಕ್ಕೆ ಚೈತನ್ಯವಿಲ್ಲದೆ ಇರುವದರಿಂದಾಗಲಿ, ದೈವಾನುಗ್ರಹ ದಿಂದ ಬಾಲ್ಯದಲ್ಲಿ ಪ್ರಾಪ್ತವಾಗುವ ಗಂಡಗಳಿಗೆ ಗುರಿಯಾ ಗದೆ ಬದುಕಿ ಅನ್ಯೋನ್ಯರಾಗಿದ್ದರೆ, ೧೫—೧೬ ವರ್ಷಗಳಲ್ಲಿ ಯೇ ದುರ್ಬಲರಾದ, ಜ್ಞಾನಶೂನ್ಯರಾದ, ಅಲ್ಪಾಯು ಷ್ಯರಾದ ಪ್ರಜಾಭಿವೃದ್ಧಿಯನ್ನು ಮಾಡಿ ತಾವುಗಳೂ ೩೦—೩೫ ವರ್ಷಕ್ಕೆ ವೃದ್ಧರಾಗಿ ಸಾಯುವರು. ಮತ್ತು ಇಂಥಾ ಕಾರಣಗಳಿಂದಲೇ ಸ್ತ್ರೀಯರಿಗೆ ಮಧ್ಯಕಾಲದಲ್ಲಿ ಯೂ, ಯೌವನಾವಸ್ಥೆಯಲ್ಲಿಯೂ ವೈಧವ್ಯಪ್ರಾಪ್ತಿ ಯಾಗುವದನ್ನು ಬಹಳವಾಗಿ ಕಾಣುತ್ತಾ ಇದ್ದೇವೆ. ಮತ್ತು

ಇಂಥವರಿಂದ ಉತ್ಪನ್ನರಾದ ಪ್ರಜೆಗಳಿಂದಲೇ ಪರಂಪರಾ ಸಂಬಂಧವಾಗಿ ಅನೇಕ ದುರ್ಬಲರಾದ ಪ್ರಜಾಸಂತತಿಗಳುಂಟಾಗಿ ಪ್ರಜೆಗಳು ಜಾಗ್ರತೆಯಾಗಿ ಕ್ಷೀಣದೆಶೆಯನ್ನು ಹೊಂದುತ್ತಾ ಇಧಾರೆ. ಇಂಥವರನ್ನು ವಿವಾಹಿತರಾದ ಸ್ತ್ರೀಯರು ಪ್ರಬಲವಾಗಿ ವಿಧವೆಯರಾಗುತ್ತಲೂ ಇಧಾರೆ. ಇದಲ್ಲದೆ ಸೋಮಾರಿಗಳಾಗಿಯೂ, ಜ್ಞಾನಹೀನರಾಗಿಯೂ ಅಲ್ಪಾಯುಷ್ಕರಾಗಿಯೂ, ನಾಸ್ತಿಕರಾಗಿಯೂ, ಇರುವ ಪ್ರಜಾಭಿವೃದ್ಧಿಯಾಗುವದಕ್ಕೆ ಈ ಬಾಲ್ಯವಿವಾಹವೇ ಮುಖ್ಯಕಾರಣವಾಗಿಧೆ ಎಂದು ಅನುಭವದಿಂದ ತಡೆಯಿಲ್ಲದೆ ಹೇಳಬಹುದಾಗಿಧೆ.

ಇದಕ್ಕೆ ಶಾಸ್ತ್ರಪ್ರಮಾಣಾನ್ತರವೂ ಉಂಟು.
ಅಷ್ಟಾಂಗ ಹೃದಯನಾಮಕ ವೈದ್ಯಗ್ರಂಥೆ.
ಶ್ಲೋ || ಪೂರ್ಣಷೋಡಶವರ್ಷಾ ಸ್ತ್ರೀ
ಪೂರ್ಣವಿಂಶೇನಸಂಗತಾ | ಶುದ್ಧೇಗರ್ಭಾಶ
ಯೆಮಾರ್ಗೇ ರಕ್ತೇಶುಕ್ರೇನಿಲೇಹೃದಿ | ವೀರ್ಯ
ವಂತಂಸುತಂಸೂತೆ ತತೋನ್ಯೂನಾಬ್ದ

ಯೋಷಿತ್ಪುನಃ | ರೋಗ್ಯಲ್ಪಾಯುರಧನೋ ಯೀ
ವಾಗರ್ಭೋಭವತಿನೈವವಾ ||

ರೋಗಾದ್ಯುಪದ್ರವಗಳಿಲ್ಲದೆ ಪರಿಶುದ್ಧವಾಗಿರುವ ಗರ್ಭಸ್ಥಾನವುಳ್ಳಂಥಾ ೧೬ ವರುಷದ ಸ್ತ್ರೀಯು ದೃಢಾಂಗನಾಗಿರುವ ೨೦ ವರುಷಕ್ಕೆ ಮೇಲ್ಪಟ್ಟ ವಯುಸ್ಸುಳ್ಳ ಪುರುಷನನ್ನು ಹೊಂದಿದರೆ ತೇಜೋವಂತನಾಗಿಯೂ, ದೃಢಾಂಗನಾಗಿಯೂ, ಪೂರ್ಣಾಯುಷ್ಯನಾಗಿಯೂ ಇರುವ ಪುತ್ರನನ್ನು ಪ್ರಸುವಿಸುವಳು. ೧೬ ವರುಷಕ್ಕೆ ಕಡಿಮೆಯಾದ ವಯುಸ್ಸುಳ್ಳ ಸ್ತ್ರೀಯು ೨೦ ವರುಷಗಳಿಗಿಂತಲೂ ಕಡಿಮೆಯಾದ ಪುರುಷನನ್ನು ಹೊಂದಿದರೆ, ಗರ್ಭವೇ ಉಂಟಾಗಲಾರದು. ಅಥವಾ ಒಂದು ವೇಳೆ ಗರ್ಭ ಉಂಟಾದರೆ, ಅಲ್ಪಾಯುಷ್ಯನಾಗಿಯೂ, ರೋಗಿಯಾಗಿಯೂ, ನೀಚಬುದ್ಧಿಯುಳ್ಳಂಥಾ ನಾಸ್ತಿಕನಾಗಿಯೂ ಇರುವ ಪುತ್ರನನ್ನು ಪಡೆಯುವಳೆಂದರ್ಥವು. ಮತ್ತೂ ಈ ಕಾಲದಲ್ಲಿ ಪಾತ್ರಸ್ನಾನ ಮುಂತಾದ ನಮ್ಮ ಆರ್ಯಧರ್ಮಗಳೆಲ್ಲವೂ ನಷ್ಟವಾಗುವದಕ್ಕೂ ಮತ್ತು ಕಷ್ಟಸಾಧ್ಯವಾದ ವೇದಾಧ್ಯಯನ ಮುಂ

ತ್ರಾಂತವುಗಳಲ್ಲಿ ಬುದ್ಧಿ ಪ್ರವೇಶಿಸದೆ ಇರುವದಕ್ಕೂ, ಈ ಆರ್ಯ ಧರ್ಮಗಳೆಲ್ಲ ನಷ್ಟವಾದ್ದರಿಂದಲೇ ಲೋಕದಲ್ಲಿ ಅನೇಕ ಅನರ್ಥಗಳು ಸಂಭವಿಸುವದಕ್ಕೆ ಮಾರ್ಗವಾಗಿಯೂ, ಪ್ರಜೆಗಳು ಸರಿಯಾದ ಒಂದು ಮಾರ್ಗದಲ್ಲಿ ಇರುವದಕ್ಕೆ ಆಗ ಜೀಲು ಹೋದದ್ದರಿಂದ ಈ ಮೇಲ್ಕಂಡ ಅನೇಕ ಅನರ್ಥಗಳು ಪ್ರಜೆಗಳಿಗೆ ದುರ್ಬಲರಾದ ಪ್ರಜಾಭಿವೃದ್ಧಿಯಿಂದಲೇ ಉಂಟಾಯಿತು. ಇದಕ್ಕೆಲ್ಲಾ ಬಾಲ್ಯವಿವಾಹವೇ ಮುಖ್ಯ ಕಾರಣವೆಂದು ಹೇಳುವದರಲ್ಲಿ ಯಾವ ಸಂಶಯವೂ ಇರಲಾರದು. ಪ್ರಜೆಗಳಿಗೆ ಮೇಲ್ಕಂಡ ಅನರ್ಥಗಳು ಸಂಪೂರ್ಣವಾಗಿ ಉಂಟಾಗಲು ಬಾಲ್ಯವಿವಾಹ ನಿರ್ಬಂಧವಿಲ್ಲದೇ ಇರುವದೇ ಕಾರಣವಾಗಿ ಇದೆ. ಚಿಂತೆಯಿಲ್ಲ. ಬಾಲ್ಯವಿವಾಹ ನಿರ್ಬಂಧವನ್ನುಂಟುಮಾಡಿ ಆ ನಿರ್ಬಂಧಕ್ಕೆ ನಾವುಗಳು ಪಾತ್ರರಾದರೆ ಈ ಮೇಲ್ಕಂಡ ಅನರ್ಥಗಳು ಸಾದ್ಯಂತವಾಗಿ ನಿವಾರಣೆಯಾಗುವ ಬಗೆ ಹ್ಯಾಗೆ ? ವಿಚಾರಮಾಡೋಣ:—

ಬಾಲ್ಯವಯಸ್ಸನ್ನು ತಪ್ಪಿಸಿ ಸ್ತ್ರೀಪುರುಷರಿಗೆ ವಿವಾಹ ಮಾಡೋಣದರಿಂದ ಶಾಸ್ತ್ರೋಕ್ತವಾದ ಗಂಡಕಾಲಗಳು ತಪ್ಪಿ, ದಂಪತಿಗಳು ಅನ್ಯೋನ್ಯರಾಗಿ ಬಹಳ ದಿವ

ಸಗಳು ಜೀವಿಸಬಹುದು. ಮತ್ತು ಯೌವನದಲ್ಲಿ ಪ್ರಜೋತ್ಪತ್ತಿಯಾದರೆ, ಮೇಲೆಹೇಳಿದ ಪ್ರಮಾಣಾನುಸಾರವಾಗಿ, ಆ ಪ್ರಜೆಗಳು ದೀರ್ಘಾಯುಷ್ಯವಂತರಾಗಿಯೂ, ಕುಶಲರಾಗಿಯೂ, ಸಮರ್ಥರಾಗಿಯೂ, ಪರಸ್ಪರ ಉಪಕಾರ ಮಾಡುವದರಲ್ಲಿ ಆಸಕ್ತರಾಗಿಯೂ, ವಿದ್ಯಾವ್ಯಾಸಂಗಮಾಡಲು ಬಹಳ ಕೌತೂಹಲವಿಶಿಷ್ಟರಾಗಿಯೂ, ತೇಜಸ್ವಿಗಳಾಗಿಯೂ ಇರಲು ಯಾವ ಸಂಶಯವೂ ಇರಲಾರದು. ಇಂಥಾ ಪ್ರಜೆಗಳು ಅಭಿವೃದ್ಧಿಯಾದರೆ, ಲೋಕದಲ್ಲಿ ಈಗ ನಡೆಯುವ ಅನೇಕ ಅನರ್ಥಗಳು ನಿಂತುಹೋಗುವದಲ್ಲದೆ, ಸ್ತ್ರೀಯರಿಗೆ ಉಂಟಾಗುವ ವೈಧವ್ಯಾವಸ್ಥೆಯು ಶುದ್ಧಾಂಗವಾಗಿ ನಿಲ್ಲುವದರಲ್ಲಿ ಯಾವ ಸಂಶಯವೂ ಇರಲಾರದು.

ಚಿಂತೆಯಿಲ್ಲ. ಬಾಲ್ಯವಿವಾಹನಿರೋಧದಿಂದ ಪ್ರಜೆಗಳಿಗೆ ಈಗ ಇರುವದಕ್ಕಿಂತಲು ಮುಂದೆ ಸುಖನೇ ಉಂಟಾಗಬಹುದು. ಆದರೆ ಈಗ ಗೌರ್ಕಮೆಂಟಿನವರು ನಿಯಾಮಕ ಮಾಡಿರುವ ೮—೧೪ ವರುಷಗಳಿಂದಲೂ,೧೨—೧೪ ವರುಷಗಳಿಂದಲೂ,ಉಂಟುಮಾಡುವ ನಿರ್ಬಂಧದಿಂದ ಮೇಲ್ಕಂ

ಡ ಅನುಕೂಲಗಳು ನಮ್ಮ ಗಳಿಗೆ ನೆರವೇರುತ್ತದೆಯೋ ಎಂ
ದು ವಿಚಾರಮಾಡಿದರೆ, ಮೇಲ್ಕಂಡ ಅನುಕೂಲಗಳು ಎಂ
ದಿಗೂ ಪ್ರಜೆಗಳಿಗೆ ಈ ನಿರ್ಬಂಧದಿಂದ ಉಂಟಾಗಲಾರದು.
ನಿರ್ಬಂಧಮಾಡುವ ನಮ್ಮ ಗೌರ್ನಮೆಂಟಿನವರ ತಾತ್ಪರ್ಯ
ವೂ ನೆರವೇರಲಾರದು. ಹ್ಯಾಗೆಂದರೆ :—

ಈ ರೂಲು ಪ್ರಕಾರವಾಗಿ ೧೮ ವರುಷದ ಪುರುಷನಿ
ಗೆ ೮ ವರ್ಷಕ್ಕೆ ಮೇಲ್ಪಟ್ಟ ಕನ್ನಿಕೆಯನ್ನು ವಿವಾಹಮಾಡ
ಬಹುದು. ಹಾಗೆ ಮಾಡಿದರೆ ಉಭಯತ್ರರಿಗೂ ಬಾಲ್ಯವ
ಯಸ್ಸಿನ ಪ್ರಯುಕ್ತ ಉಭಯತ್ರರಿಗೂ ಮೇಲೆಹೇಳಿದಂತೆ
ಗಂಡಕಾಲಗಳು ತಪ್ಪಲು ಅವಕಾಶವಿಲ್ಲವಾದ್ದರಿಂದ ಬಾಲಕಿ
ಯರಿಗೆ ವೈಧವ್ಯಾವಸ್ಥೆಯು ತಪ್ಪುತ್ತದೆಂದು ಹೇಳಲು ಆಗ
ಲಾರದು. ಮತ್ತು ೧೮ ವರ್ಷದ ಪುರುಷನಿಗೆ ೧೧—೧೨
ವರ್ಷದ ಹುಡುಗಿಯನ್ನು ವಿವಾಹಮಾಡಬಹುದು. ಆದ್ದ
ರಿಂದ ಪುರುಷರಿಗೆ ೧೫—೧೬ ವರ್ಷದಲ್ಲಿಯೇ ಪ್ರಜೋ
ತ್ಪತ್ತಿಗೆ ಅವಕಾಶವಾಗುತ್ತಾದ ಕಾರಣ ದುರ್ಬಲರಾದ ಪ್ರ
ಜಾಭಿವೃದ್ಧಿಯಿಂದುಂಟಾಗುವ ಅನರ್ಥಗಳು ನಿಲ್ಲುವದಕ್ಕೂ

ಅವಕಾಶವಾಗಲಾರದು. ಮತ್ತು ಉಭಯತ್ರರಿಗೂ ಬಾ ಲ್ಯಾವಸ್ಥೆಯೊದಕಾರಣ ವರಸೌಮ್ಯಗಳಿಲ್ಲದೆ ಇರುವದ್ದ ರಿಂದುಂಟಾಗುವ ಅನರ್ಥಗಳು ಶಮನವಾಗಲಾರದು. ೫೦ ವರುಷದವನು ೧೪ ವರ್ಷದವಳನ್ನು ಮದುವೆಮಾಡಿಕೊಂ ಡಾಗ್ಯೂ ಗೊತ್ತಾಗಿ ಅವಳಿಗೆ ವೈಧವ್ಯಾವಸ್ಥೆಯು ತಪ್ಪ ಲಾರದು. ಆ ೫೦ ವರ್ಷದವನಿಗೆ ಉತ್ಪನ್ನರಾಗುವ ಪ್ರ ಜೆಗಳು ದೃಢಾಂಗರಾಗಿ ಒಳ್ಳೇ ಪ್ರಜೆಗಳೆನ್ನಿಸಿಕೊಳ್ಳಲಾರರು. ಹೀಗೆಯೇ ಮೇಲ್ಕಂಡಅನರ್ಥಗಳಿಗೆಲ್ಲಾ ಅವಕಾಶವಿದೆ ಎಂದೇ ಹೇಳಬಹುದು.

ಮುಖ್ಯವಾಗಿ ಈಗ ನಿರೂಪಿಸಿರುವ ಪ್ರಕಾರ ನಿರ್ಬಂ ಧಿಸಿದರೆ ಮೇಲ್ಕಂಡ ಅನುಕೂಲಗಳಲ್ಲಿ ಪ್ರಜೆಗಳಿಗೆ ಯಾವ ದೊಂದೂ ಉಂಟಾಗಲಾರದು.

ಆದರೆ ಇದಕ್ಕೆ ಪ್ರಯೋಜನಾಂತರಗಳನ್ನು ಕಲ್ಪಿಸ ಬಹುದು, ಏನೆಂದರೆ:—೮ ವರುಷದವಳಿಗಾಗಿ ವಿವಾಹಿತಳಾದ ಕನ್ನಿಕೆಯು ವಿಧವೆಯಾದರೆ ಗಂಡನ ಸ್ವತ್ತಿಗೆ ಬಾಧ್ಯಳಾಗ ಲಾರಳೆಂದೂನೂ ಮತ್ತು ಜೀವನಾಂಶ ಮುಂತಾದ್ದು ದೊ ರೆಯಲಾರದೆಂದೂನೂ ಇವೇ ಮುಂತಾದ ಕೆಲವು ಪ್ರಯೋ

ಜನಗಳನ್ನು ಕಲ್ಪಿಸಬಹುದೇ ಹೊರ್ತಾಗಿ ಪ್ರಜೆಗಳಿಗೆ ಯಾವ ಅನುಕೂಲಗಳೂ ಇದರಿಂದ ನೆರವೇರಲಾರದು, ಬೆಂತೆಯಿಲ್ಲಿ, ೮ ವರ್ಷದವಳನ್ನು ೧೪ ವರುಷದವನಿಗೂನೂ, ೯ ವರುಷದವಳನ್ನು ೧೫ ವರ್ಷದವನಿಗೂನೂ, ೧೦ ವರ್ಷದವಳನ್ನು ೧೬ ವರ್ಷದವನಿಗೂನೂ ವಿವಾಹಮಾಡಬೇಕೆಂದು ಹೀಗೆಯೇ ಕ್ರಮವಾಗಿ ನಿರ್ಬಂಧಿಸುತ್ತೇವೆಂಬದಾಗಿ ಹೇಳಬಹುದು. ಇದರಿಂದಲೂ ಯಲ್ಲಾ ಅನುಕೂಲಗಳೂ ನಮಗೆ ಉಂಟಾಗಲಾರದು. ಮತ್ತು ಈ ನಿರ್ಬಂಧವು ನಡೆಯಲಾರದು. ಮತ್ತು ಪ್ರಜೆಗಳಿಗೆ ಬಹಳ ತೊಂದರೆ ಉಂಟುಮಾಡುವಂಥಾದ್ದಾಗಿಯೂ ಇಥೆಯಾವಕಾರಣ ಅಂಗೀಕರಿಸಲು ಆಗಲಾರದು.

ಇಗಲ್ಲದೆ ೮ ವರ್ಷದಲ್ಲಿ ಸ್ತ್ರೀಯರಿಗೆ ವಿವಾಹ ಮಾಡುವದು ಶಾಸ್ತ್ರಸಮ್ಮತವೂ ಅಲ್ಲ. ಹ್ಯಾಗಂದರೆ:—

ಮನುಸ್ಮೃತಿಯಲ್ಲಿ.

ವಿವಾಹಯೇದಷ್ಟವರ್ಷಾಮೇವಂಧರ್ಮೋ
ನಹೀಯತೇ ||

ಷಡಂಗವೇದಾಧ್ಯಯನಮಾಡಿದವನಾಗಿಯೂ, ದೃಢಾಂಗನಾಗಿಯೂ, ರೂಪವಂತನಾಗಿಯೂ, ಗುಣಶೀಲನಾಗಿ

ಯುತಿ, ಇರುವ ವರನು ದೊರೆತರೆ ೮ ವರ್ಷದ ಕನ್ನಿಕೆಯನ್ನಾದರೂ ಯಥಾಶಾಸ್ತ್ರವಾಗಿ ವಿವಾಹಮಾತು. ಇದರಿಂದ ಶಾಸ್ತ್ರವಿರುದ್ಧವಾದರೂ ಚಿಂತೆಇಲ್ಲ. ದೋಷ ಉಂಟಾಗಲಾರದೆಂದು ಅರ್ಥವು. ಇದನ್ನು ಪರ್ಯಾಲೋಚಿಸಿದರೆ ೮—೯ ವರ್ಷಗಳ ತನಕ ಸ್ತ್ರೀಯರಿಗೆ ವಿವಾಹಮಾಡಕೂಡದೆಂದು ಏರ್ಪಡುತ್ತೆ. ಅಥವಾ ೮—೯ ವರುಷಗಳಲ್ಲಿ ಮಾಡುವಂತೆ ಅನೇಕ ವಚನಗಳು ಇವೆ ಎಂದು ಹೇಳಿದರೆ ಅವುಗಳೆಲ್ಲವೂ ಸಕಾರಣವಾಗಿ ಯುಗಾಂತರ ವಿಷಯವೆಂದು ಹೇಳಬಹುದು. ಅನುಭವಸಿದ್ಧವಾಗಿಯೂ ಅನೇಕ ಕಾರಣಗಳು ಇರುವದ್ದರಿಂದ ಈಗ ಅಂಗೀಕರಿಸಲೂ ಖಂಡಿತವಾಗಿ ಆಗಲಾರದು ಎಂದು ಹೇಳಬಹುದು.

ಮೇಲ್ಕಂಡ ಅನುಕೂಲಗಳು ಪ್ರಜೆಗಳಿಗೆ ಉಂಟಾಗಬೇಕಾದರೆ ಬಾಲ್ಯವಿವಾಹವನ್ನು ಯಾವರೀತಿಯಲ್ಲಿ ನಿರ್ಬಂಧಿಸಬೇಕೆಂದರೆ:—೧೦ ವರ್ಷ ಮೊದಲ್ಗೊಂಡು ಕನ್ನಿಕೆಗೆ ವಿವಾಹಮಾಡಬೇಕೆಂತಲೂ ಮತ್ತು ೨೦ ವರ್ಷದ ಮೇಲ್ಪಟ್ಟ ಪುರುಷರಿಗೆ ವಿವಾಹ ಮಾಡಬೇಕೆಂದೂನೂ ೩೦ ವರುಷಕ್ಕೆ ಮೇಲ್ಪಟ್ಟವನು ಮದುವೆಯಾಗಬೇಕಾದರೆ ( ವಿವಾಹ

ಮಾಡಿಕೊಳ್ಳಲು ಯೋಗ್ಯನಾಗಿಧಾನೆಂದು ) ಇಂಗ್ಲೀಷ್ ವೈದ್ಯರಿಂದಾಗಲಿ ಅಥವಾ ನೇಟಿವ್ ವೈದ್ಯರಿಂದಾಗಲಿ ಒಂದು ಯೋಗ್ಯತಾಪತ್ರಿಕೆಯನ್ನು ಪಡೆದರೆ ವಿವಾಹಮಾಡಿಕೊಳ್ಳಬಹುದೆಂತಲೂ ಮತ್ತು ಮದುವೆಯಾಗುವದಕ್ಕೆ ಸರಿಯಾದ ಕಾರಣಗಳನ್ನು ಗೌರ್ನಮೆಂಟಿನವರಿಗೆ ತೋರಿಸಬೇಕೆಂದೂನೂ ಏರ್ಪಡಿಸಿದರೆ ಮೇಲ್ಕಂಡ ಅನುಕೂಲಗಳೆಲ್ಲವೂ ನಮ್ಮಗಳಿಗೆ ಜಾಗ್ರತೆಯಾಗಿಯೇ ಉಂಟಾಗುವದರಲ್ಲಿ ಯಾವ ತೊಂದರೆಯೂ ಇರಲಾರದು ಎಂದು ತಡೆಇಲ್ಲದೆ ಪ್ರಮಾಣಪೂರ್ವಕವಾಗಿ ಹೇಳಬಹುದಾಗಿ ಇಧೆ. ಹ್ಯಾಗಂದರೆ:

೧೦ ವರ್ಷದಾರಭ್ಯ ಸ್ತ್ರೀಯರಿಗೆ ವಿವಾಹ ಮಾಡಲು ಪ್ರಾರಂಭಿಸಿದರೆ, ಆ ಬಾಲಕಿಯರಿಗೆ ( ಕನ್ಯಾವರಯತೆ ರೂಪಂ ) ಎಂಬಹಾಗೆ ಅನುರೂಪನಾದ ವರನನ್ನು ವರಿಸಬೇಕೆಂದೂನೂ ಮತ್ತು ಕೇವಲ ಐಶ್ವರ್ಯಮುಂತಾದವುಗಳು ನಮ್ಮ ಕ್ಷೇಮಕ್ಕೆ ಕಾರಣವಾಗಲಾರದೆಂದೂನೂ, ದುರ್ಬೋಧನೆ ಮಾಡುವವರ ಮಾತುಗಳನ್ನು ಕೇಳಬಾರದೆಂದೂನೂ ದೃಢಾಂಗನಾಗಿರುವ ಮತ್ತು ವಿದ್ಯಾರೂಪಯೌವ್ವನಸಂಪನ್ನನಾಗಿರುವಂಥಾ ವರನನ್ನು ವರಿಸಬೇಕೆಂ

ದೂನೂ, ಪರ್ಯಾಲೋಚಿಸತಕ್ಕ ಶಕ್ತಿಯು ಉಂಟಾಗುವದ್ದ ರಿಂದ, ವೆರಸಾಮ್ಯಗಳಿಲ್ಲದೆ ಇರುವದ್ದರಿಂದುಂಟಾಗುವ ಅನರ್ಥಗಳು ಪ್ರಜೆಗಳಿಗುಂಟಾಗಲಾರದು. ಮತ್ತು ಈ ವಯಸ್ಕರಾದ ದಂಪತಿಗಳೇ ಪ್ರಜಾಸೃಷ್ಟಿಗೆ ಯೋಗ್ಯರಾಗಿರುತ್ತಾರೆ.

ವಚನಂ ॥ ಮನುಃ ॥ ಪ್ರಜನಾರ್ಥಂಸ್ತ್ರಿ )
ಯಸ್ಸೃಷ್ಟಾಸ್ಸಂತಾನಾರ್ಥಂಚಮಾನವಾಃ ॥

ಗರ್ಭ ಧರಿಸಲು ಸ್ತ್ರೀಯರನ್ನು ಯೋಗ್ಯರಾದ ಪ್ರಜೆಗಳನ್ನು ಉತ್ಪತ್ತಿಮಾಡಲು ಪುರುಷರನ್ನು ಲೋಕದಲ್ಲಿ ನಿರ್ಮಾಣಮಾಡಿರುವದ್ದರಿಂದ ಪ್ರಜಾಸೃಷ್ಟಿಗೆ ದಂಪತಿಗಳು ಅರ್ಹರಾಗಿರಬೇಕೆಂಬುವದೇ ಇದರ ತಾತ್ಪರ್ಯವು.

ಮನುಃ॥ ಕ್ಷೇತ್ರಭೂತಾಸ್ಮೃತಾನಾರೀ ಬೀಜ
ಭೂತಃಸ್ಮೃತಃಪುಮಾನ್ ॥

ಲೋಕದಲ್ಲಿ ಭೂಮಿಯಂತೆ ಸ್ತ್ರೀಯರು, ಬೀಜದಂತೆ ಪುರುಷರು ಎಂದರ್ಥವು. ಆದಕಾರಣ ಬೀಜ ಬಲ್ತಿದ್ದಾಗಿಯೂ, ಭೂಮಿ ಪಾಕಾಗಿಯೂ ಇದ್ದದ್ದೇ ಆದರೆ ಆ ಬೆಳೆಯು ನಮ್ಮ ಕೋರಿಕೆಯಂತೆ ಕೈಸೇರುತ್ತದೆ. ಹಾಗಿಲ್ಲದೆ ಇವೆರಡರಲ್ಲಿ ಯಾವಹಾದರೂ ಒಂದು ನ್ಯೂನತೆಇದ್ದಾಗ್ಯೂ

ಆ ಬೆಳೆಯು ಕೈಶೇರಲಾರದು. ಇದರಂತೆಯೇ ಮನುಷ್ಯರ ಲ್ಲಿಯೂ ಉಂಟೆಂದು ತಿಳಿಯಬೇಕು. ಹ್ಯಾಗಂದರೆ:—

ಮನುಃ || ಯಾದೃಶಂ ಭಜತೆಹಿಸ್ತ್ರೀಸುತಂ
ಸೂತೆ ತಥಾವಿಧಂ||

ಸ್ತ್ರೀಯು ಎಲ್ಲಾ ವಿಷಯದಲ್ಲಿಯೂ ಎಂಥಾ ಪುರುಷ ನನ್ನು ಹೊಂದುತ್ತಾಳೋ ಆ ಪುರುಷನಿಗೆ ಸದೃಶನಾ ದ ಪುತ್ರನನ್ನು ಪಡೆಯುತ್ತಾಳೆಂದರ್ಥವು. ಆದ್ದರಿಂದಲೇ ೨೦ ವರ್ಷಗಳಿಗೆ ಮೇಲ್ಪಟ್ಟ ಸಕಲಗುಣಸಂಪನ್ನನಾದ ವರನನ್ನು ೧೦ ವರ್ಷಕ್ಕೆ ಮೇಲ್ಪಟ್ಟ ಸಕಲಗುಣಸಂಪನ್ನೆ ಯಾದ ಕನ್ನಿಕೆಯು ವರಿಸಬೇಕೆಂಬುವದೇ ಮುಖ್ಯಕರ್ತ ವ್ಯವಾಗಿಧೆ. ಆದಕಾರಣದಿಂದಲೇ ದುಷ್ಟರಾಗಿಯೂ, ನಾ ಸ್ತಿಕರಾಗಿಯೂ ಇರುವ ಪ್ರಜೆಗಳು ಲೋಕದಲ್ಲಿ ಹುಟ್ಟಲೇ ಬಾರದೆಂದು ಯೋಚಿಸಿ ಖಂಡಿತವಾಗಿ ಮನುಬ್ರಹ್ಮನು ಹೇ ಳುತ್ತಾನೆ.

ಶ್ಲೋ||ಕಾಮಮಾಮರಣಾತ್ತಿಷ್ಠೇದ್ಗೃಹೇಕನ್ಯರ್ತುಕ
ಮತ್ಯಪಿ | ನಚೈವೈನಾಂಪ್ರಯಚ್ಛೇತ ಗು
ಣಹೀನಾಯಕರ್ಹಿಚಿತ್ ||

ಕನ್ಯೆಯು ರಜಸ್ವಲೆಯಾದಾಗ್ಯೂ ಆಗಲಿ, ಅಥವಾ ಸಾಯು ವತನಕ ಮನೆಯಲ್ಲಿಯೇ ಪುತ್ರನಂತೆ ಇದ್ದರೂ ಇರಲಿ, ಇದ ರಿಂದ ದೋಷವುಂಟಾಗಲಾರದು. ವಿದ್ಯವೇ ಮುಂತಾದ ಸಮಸ್ತಗುಣಗಳಿಂದ ಪರಿಪೂರ್ಣನಲ್ಲದೆ ಇರುವ ವರನಿಗೆ ಎಂದಿಗೂ ಪುತ್ರಿಯನ್ನು ಕೊಟ್ಟು ವಿವಾಹಮಾಡಬೇಡವೆಂ ದು ಶ್ಲೋಕದ ಅಭಿಪ್ರಾಯವು. ಅಥವಾ ತಂದೆಯು ಮೂ ಢನಾಗಿ ಅನುರೂಪನಾದ ವರನಿಗೆ ಕೊಡದೆ ಹೋದರೆ ಸ್ತ್ರೀ ಯು, ತಾನೇ ಸ್ವತಂತ್ರಿಸಿ ಗುಣವಂತನಾದಪತಿಯನ್ನು ವರಿಸಬೇಕೆಂದು ಹೇಳುತ್ತಾರೆ.

ಮನು೩ ||ತ್ರೀಣಿವರ್ಷಾಣ್ಯುದೀಕ್ಷೇತಕುಮಾ
ರ್ಯೃತುಮತೀಸತೀ | ಊರ್ಧ್ವಂತುಕಾಲಾ
ದೇತಸ್ಮಾದ್ವಿಂದೇತಸದೃಶಂಪತಿಂ ||

ಸ್ತ್ರೀಯು ಋತುಮತಿಯಾದಮೇಲೆ ೩ ವರ್ಷಗಳ ಪರ್ಯಂ ತರ ತಂದೆಯ ಆಜ್ಞಾನುಸಾರವಾಗಿದ್ದು, ಅದುವರಿವಿಗೂ ಸರಿಯಾದ ವರನಿಗೆ ಕೊಟ್ಟು ಮದುವೇಮಾಡದೇ ಹೋದ ರೆ ನಂತರ ೪ನೇ ವರ್ಷದಲ್ಲಿ ತನಗೆ ಅನುರೂಪನಾದ ವರನ ನ್ನು ವರಿಸಬಹುದೆಂದು ಅಭಿಪ್ರಾಯವು. ಚಿಂತೆಯಿಲ್ಲ;

ಅವಳು ವರಿಸಿದಾಗ್ಯೂ ಪುರುಷನು ಅಂಥವಳನ್ನು ಪರಿಗ್ರಹಿಸುವದು ಹ್ಯಾಗೆ ? ಮತ್ತು ಇವರಿಬ್ಬರಿಗೂ ಶಾಸ್ತ್ರಸಮ್ಮತವಾದ ವೃಷಲೀಪತಿತ್ವಾದಿದೋಷಗಳು ಹ್ಯಾಗೆ ಸಂಭವಿಸದೇ ಹೋದೀತು ಎಂದು ನಿಷೇಧಿಸಿದರೆ ಈ ಪ್ರಕಾರ ವರಿಸುವ ಸ್ತ್ರೀಗೂ ಅಂಥಾ ಸ್ತ್ರೀಯನ್ನು ವಿವಾಹಿತನಾಗುವ ಪುರುಷನಿಗೂ ಯಾವ ದೋಷವೂ ಇರಲಾರದೆಂದು ಹೇಳುತ್ತಾರೆ.

ಮನುಃ||ಶ್ಲೋ || ಅದೀಯಮಾನಾಭರ್ತಾರಂ ಅಧಿ
ಗಚ್ಛೇದ್ಯದಿಸ್ವಯಂ | ನೈನಃಕಿಂಚಿದವಾ
ಪ್ನೋತಿನಚಯಂಸಾಧಿಗಚ್ಛತಿ ||

ಸ್ತ್ರೀಯು ಋತುಮತಿಯಾದ ೩ ವರ್ಷ ಪರ್ಯಂತರವೂ ತಂದೆ ಅನುರೂಪನಾದ ವರನಿಗೆ ಕೊಡದೆಹೋದರೆ ನಂತರ ಸ್ವತಂತ್ರವಾಗಿ ಸದೃಶನಾದ ಪತಿಯನ್ನು ವರಿಸುವದರಿಂದ ಯಾವ ದೋಷವನ್ನೂ, ಯಾವ ಪಾಪವನ್ನೂ ಹೊಂದಲಾರಳು. ಮತ್ತು ಇಂಥಾ ಸ್ತ್ರೀಯನ್ನು ವಿವಾಹಮಾಡಿಕೊಳ್ಳುವ ಪುರುಷನೂ ಕೂಡ ಯಾವ ದೋಷವನ್ನೂ ಹೊಂದಲಾರನು ಎಂದು ಅಭಿಪ್ರಾಯವು. ಮುಖ್ಯವಾಗಿ ಸಮಸ್ತಗುಣಸಂಪನ್ನನಾದ ವರನಿಗೆ ಕೊಡಬೇಕೇ ಹೊರ್ತು

ಅನ್ಯಥಾ ವಿವಾಹವೇ ಮಾಡಕೊಡದೆಂದು ಧರ್ಮಶಾಸ್ತ್ರದ ಅಭಿಪ್ರಾಯವು ವ್ಯಕ್ತವಾಗುತ್ತೆಯೊದ್ದರಿಂದ ಗುಣವಂತನಾಗಿಯೂ, ವಿದ್ಯಾವಂತನಾಗಿಯೂ, ಸತ್ಕುಲಪ್ರಸೂತನಾಗಿಯೂ ೨೦ ವರ್ಷಕ್ಕೆ ಮೇಲ್ಪಟ್ಟಿರುವ ಪುರುಷನಿಗೇನೇ ೧೦ ವರ್ಷಕ್ಕೆ ಮೇಲ್ಪಟ್ಟಿರುವ ಕನ್ನಿಕೆಯನ್ನೇ ವಿವಾಹ ಮಾಡಿದರೆ ಬಾಲ್ಯವಿವಾಹ ನಿರೋಧದಿಂದುಂಟಾಗುವ ಮೇಲೆಹೇಳಿದ ಅನುಕೂಲಗಳೆಲ್ಲವೂ ನಮ್ಮಗಳಿಗೆ ತಡೆಯಿಲ್ಲದೆ ಸಿದ್ಧಿಸುವದು ಎಂದು ತಡೆಯಿಲ್ಲದೆ ಹೇಳಬಹುದಾಗಿಧೆ. ಇದಲ್ಲದೆ ಪುರುಷನು ಯಾವದಾದರು ಒಂದು ಭಾಷೆಯಲ್ಲಿ ತಕ್ಕಮಟ್ಟಿಗೆ ಪರಿಚಯ ಸಂಪಾದಿಸುವದಕ್ಕೂ ಮತ್ತು ಅನುರೂಪಳಾದ ಕನ್ನಿಕೆಯನ್ನು ವಿವಾಹಮಾಡಿಕೊಳ್ಳಬೇಕೆಂತಲೂ, ಅಂಥಾ ಸ್ತ್ರೀಯನ್ನು ಸುಖವಾಗಿ ಪೋಷಿಸಲು ತನಗೆ ಶಕ್ತಿ ಇಧಯೇ ಅಥವಾ ಇಲ್ಲವೇ ವಿವಾಹಮಾಡಿಕೊಳ್ಳುವದು ಯುಕ್ತವೇ ಅಥವಾ ಅಶಕ್ತನಾದ ನನಿಗೆ ಅಯುಕ್ತವೇ ಮುಂದೆ ಸುಖವಾಗಿ ಜೀವಿಸಲು ನನಿಗೆ ಸಾಮರ್ಥ್ಯ ಉಂಟೆ ಇಲ್ಲವೆ ಎಂಬದಾಗಿ ಅನೇಕಪ್ರಕಾರವಾದ ತನ್ನ ಅನುಕೂಲ ಪ್ರತಿಕೂಲಗಳನ್ನು ತಾನೇ ವಿಚಾರಮಾಡಿಕೊಳ್ಳ

ತು ೨೦ ವರ್ಷ ವಯಸ್ಸಿನೊಳಗೆ ಪುರುಷನಿಗೆ ಶಕ್ತಿಯುಂಟಾಗಲಾರದು. ಈ ವಿಷಯಗಳೆಲ್ಲಾ ಪರ್ಯಾಲೋಚಿಸಿ ಪುರುಷನಿಗೆ ೮ ವರ್ಷವಯಸ್ಸಿನಲ್ಲಿ ಉಪನಯನವನ್ನು ಮಾಡಿ ನಂತರ ೧೨ ವರ್ಷಗಳ ಪರ್ಯಂತರವೂ ವಿದ್ಯಾಗುರುವಿನ ಅಧೀನದಲ್ಲಿಡಬೇಕೆಂದು ಹೇಳಿರುತ್ತಾರೆ. ನಮ್ಮ ಆರ್ಯರ ವೃದ್ಧಾಚಾರವೂ ಇದೇರೀತಿಯಾಗಿ ಯುಗಾಂತರಗಳಿಂದಲೂ ಅನುಸರಿಸಿ ಬರುತ್ತಾ ಇದೆ. ಚಿಂತೆಯಿಲ್ಲ; ಪುರುಷರಿಗೆ ೨೦ ವರ್ಷಗಳ ಮೇಲ್ಪಟ್ಟು ಸ್ತ್ರೀಯರಿಗೆ ೧೦ ವರ್ಷದಿಂದ ಪ್ರಾರಂಭಿಸಿ ವಿವಾಹಮಾಡಬೇಕೆಂಬ ವಿಷಯದಲ್ಲಿ ಶಾಸ್ತ್ರಪ್ರಮಾಣಗಳು ಎಷ್ಟರಮಟ್ಟಿಗೆ ದೊರೆಯುತ್ತವೆಂದು ವಿಚಾರಮಾಡೋಣ:—

ಮನುಃ || ತ್ರಿಂಶದ್ವರ್ಷೋವಹೇತ್ಕನ್ಯಾಂ
ಹೃದ್ಯಾಂದ್ವಾದಶವಾರ್ಷಿಕೀಂ ||

೩೦ ವರ್ಷದ ಪುರುಷನು ೧೨ ವರ್ಷದಸುಂದರಳಾದ ಸ್ತ್ರೀಯನ್ನು ವಿವಾಹಮಾಡಿಕೊಳ್ಳಬೇಕು ಎಂದು ಅರ್ಥವು.

ಬೃಹಸ್ಪತಿಃ:—

ತ್ರಿಂಶದ್ವರ್ಷೋದಶಾಬ್ದಾಂತು ಭಾರ್ಯಾಂವಿ
ನ್ದೇತನಗ್ನಿಕಾಂ ||

೩೦ ವರ್ಷದವನು ೧೦ ವರ್ಷದ ಕನ್ನಿಕೆಯನ್ನಾದರೂ ವಿವಾಹಮಾಡಿಕೊಳ್ಳಬಹುದೆಂದು ಅರ್ಥವು.

ವಿಷ್ಣುಪುರಾಣೆ.

ದಷ್ವೈರ್ರೇಕಗುಣಾಂಭಾರ್ಯಾಂಉದ್ವಹೇತ್ರಿ
ಗುಣಸ್ವಯಂ ||

ಒಂದು ಭಾಗ ವಯಸ್ಸುಳ್ಳ ಕನ್ನಿಕೆಯನ್ನು ಅದಕ್ಕೆ ೩ ರಷ್ಟು ವಯಸ್ಸುಳ್ಳ ಪುರುಷನು ಮದುವೆಯಾಗಬೇಕೆಂದರ್ಥವು. ಅಂದರೆ ೧೦ ವರ್ಷದ ಕನ್ನಿಕೆಯನ್ನು ೩೦ ವರ್ಷದವನು ವಿವಾಹಮಾಡಿಕೊಳ್ಳಬೇಕೆಂದು ಅಭಿಪ್ರಾಯವು. ಈ ವಾಕ್ಯಗಳಿಂದ ಪುರುಷನಿಗೆ ೩೦ ವರ್ಷಗಳ ಮೇಲ್ಪಟ್ಟು ಸ್ತ್ರೀಯರಿಗೆ ಹತ್ತುವರ್ಷ ಮೊದಲ್ಗೊಂಡು ರಜಸ್ವಲೆಯಾಗುವ ವರಿವಿಗೂ ವಿವಾಹಕಾಲ ಶಾಸ್ತ್ರಸಮ್ಮತವಾದ್ದೆಂದು ಹೇಳಲು ಯಾವಸಂಶಯವೂ ಇರಲಾರದು ! ಚಿಂತೆಯಿಲ್ಲ. ಇನ್ನೂ ವಿಚಾರ ಮಾಡೋಣ : ಪರಾಶರಃ:—

ಪ್ರಾಪ್ತೇದ್ವಾದಶಮೇವರ್ಷೇಯಃ ಕನ್ಯಾಂನಪ್ರ
ಯಚ್ಛತಿ । ಮಾಸಿಮಾಸಿರಜಸ್ತಸ್ಯಾಃ
ಪಿತಾಪಿಬತಿಶೋಣಿತಂ ॥

೧೨ ವರ್ಷದವರಿವಿಗೂ ಯಾವನು ಕನ್ಯೆಗೆ ವಿವಾಹಮಾಡದೆ ಇರುತ್ತಾನೋ ಅವನು ದೋಷಕ್ಕೆ ಪಾತ್ರನಾಗುತ್ತಾನೆಂದರ್ಥವು. ಅಂದರೆ ರಜಸ್ವಲೆಯಾಗುವವರಿವಿಗೂ ಸ್ತ್ರೀಯರಿಗೆ ವಿವಾಹಕಾಲವುಂಟೆಂದು ಸ್ಥಿರಪಟ್ಟಿತು.

ಬೋಧಾಯನಃ.

ದದ್ಯಾದ್ಗುಣವತೇಕನ್ಯಾಂ ನಗ್ನಿಕಾಂಬ್ರ
ಹ್ಮಚಾರಿಣೇ । ಅಪಿವಾಗುಣಹೀನಾಯ ನೋ
ಪರುಂಧ್ಯಾದ್ರಜಸ್ವಲಾಂ ॥

ವಿವಾಹಿತಳಾಗದೆ ಇರುವಂಥಾ ಕನ್ನಿಕೆಯನ್ನು ಸರ್ವಗುಣಸಂಪನ್ನನಾದ ಬ್ರಹ್ಮಚಾರಿಯಾದ ವರನಿಗೆ ವಿವಾಹ ಮಾಡಬೇಕು. ಗುಣವಂತನಾದ ವರನು ದೊರೆಯದೆ ಹೋದರೆ ರಜಸ್ವಲೆಯಾಗುವ ಪರ್ಯಂತರ ನಿರೀಕ್ಷಿಸಿ, ನಂತರ ಗುಣಹೀನನಿಗಾದರೂ ಕೊಡಬೇಕೆಂದು ಅರ್ಥವು. ಅಂದರೆ ರಜ

ಸ್ವಲೆಯಾಗುವವರಿವಿಗೆ ನಿರೀಕ್ಷಿಸಿ ಸರ್ವಪ್ರಯತ್ನದಿಂದ
ಲೂ ಗುಣವಂತನಾದ ವರನಿಗೇನೆ ಕೊಡಬೇಕೇ ಹೊರ್ತು
ವಿದ್ಯವೇ ಮೊದಲಾದ ಗುಣಹೀನನಿಗೆ ಕೊಡಕೊಡದೆಂದು
ತಾತ್ಪರ್ಯವು, ಮತ್ತು ರಜಸ್ವಲೆಯಾಗುವದಕ್ಕೆ ಪೂರ್ವದ
ಲ್ಲಿಯೇ ವಿವಾಹಮಾಡಬೇಕೆ ಹೊರ್ತು ನಂತರ ಮಾಡಗೂ
ಡದೆಂದು ಮುಖ್ಯಾಭಿಪ್ರಾಯವು.

ವಸಿಷ್ಟಃ.

ಪ್ರಯಚ್ಛೇನ್ನಗ್ನಿಕಾಂ ಕನ್ಯಾಂ ಋತುಕಾಲ
ಭಯಾತ್ಪಿತಾ । ಋತುಮತ್ಯಾಂಹಿತಿಷ್ಠಂ
ನ್ಯಾಂ ದೋಷಃಪಿತರವೃಛ್ಛತಿ ॥

ಋತುಕಾಲಕ್ಕೆ ಪೂರ್ವದಲ್ಲಿಯೇ ಸರ್ವಪ್ರಯತ್ನದಿಂದ
ಲೂ ಕನ್ಯೆಯನ್ನು ಗುಣವಂತನಿಗೆ ಕೊಟ್ಟು ವಿವಾಹಮಾ
ಡಬೇಕೆಂದೂನೂ ಹಾಗೆ ಮಾಡದೆ ಹೋದರೆ ಬಹಳ ದೋ
ಷಕ್ಕೆ ಪಾತ್ರನಾಗುತ್ತಾನೆಂದು ಅಭಿಪ್ರಾಯವು.

ನಿರ್ಣಯಸಿನ್ಧು.

ಕಾಮಕಾಲೀತುಸಂಪ್ರಾಪ್ತೆ ಸೋಮೋಭುಜ್ತೆ
ತುಕನ್ಯಕಾಂ । ರಜಃಕಾಲೆತುಗಂಧರ್ವೋ

ವಸ್ತ್ನಿಸ್ತ್ರೀಕುಚದರ್ಶನೆ ತಸ್ಮಾದುದ್ವಾಹಯೇ
ತ್ಕನ್ಯಾಂಯಾವನ್ನರ್ತುಮತೀಭವೇತ್ ||

ಕನ್ಯೆಯು ರಜಸ್ವಲೆಯಾದನಂತರ ಶಾಸ್ತ್ರದೃಷ್ಟ್ಯಾದುಷ್ಟ ಳಾಗುತ್ತಾಳಾದ್ದರಿಂದ ರಜಸ್ವಲೆಯಾಗುವದಕ್ಕೆ ಪೂರ್ವ ಕಾಲದಲ್ಲಿಯೇ ಸರ್ವಪ್ರಯತ್ನದಿಂದಲೂ ಗುಣವಂತನಿಗೆ ವಿವಾಹಮಾಡಬೇಕೆಂದು ಮುಖ್ಯಾಭಿಪ್ರಾಯವು. ತಂದೆ ಯು ಗುಣವಂತನಿಗೆ ಕೊಡದೇಹೋದರೆ ಕನ್ಯೆಯು ಸ್ವಯಂ ಸದೃಶನಾದ ಪತಿಯನ್ನು ವರಿಸಬಹುದೆಂದು ಹೇಳುತ್ತಾರೆ.

ಬೋಧಾಯನಃ ||

ತ್ರೀಣಿವರ್ಷಾಣ್ಯೃತುಮತೀ ಕಾಂಕ್ಷೇತಪಿ
ತೃಶಾಸನಂ | ತತಶ್ಚತುರ್ಥೆವರ್ಷೆತು ವಿಂ
ದೇತಸದೃಶಂಪತಿಂ ||

ಋತುಮತಿಯಾದನಂತರ ೩ ವರ್ಷದ ಪರ್ಯಂತರ ತಂದೆ ಯ ಆಜ್ಞೆಯನ್ನು ಅನುಸರಿಸಿ ಅಲ್ಲಿನವರಿವಿಗೂ ಗುಣವಂ ತನಿಗೆ ಕೊಟ್ಟು ವಿವಾಹ ಮಾಡದೇ ಹೋದರೆ ೪ನೇ ವರ್ಷ ದಲ್ಲಿ ವಿದ್ಯಾದಿಗುಣಗಳಿಂದ ಯುಕ್ತನಾದ ಸದೃಶನಾದ ಪತಿ ಯನ್ನು ವರಿಸಬೇಕೆಂದು ಅಭಿಪ್ರಾಯವು.

ನಿರ್ಣಯಸಿನ್ಧೌ

ಋತುತ್ರಯಮುಪಾಸ್ಯೈವ ಕನ್ಯಾ ಕುರ್ಯಾ

ತ್ಸ್ವಯಂವರಂ ॥

ಋತುಮತಿಯಾದಮೇಲೆ ಮೂರುವರ್ಷ ಪರ್ಯಂತರ ವಿವಾಹವಿಲ್ಲದೆ ಹೋದರೆ ಗುಣವಂತನಾದ ವರನನ್ನು ತಾನೇ ಸ್ವಂತವಾಗಿ ವರಿಸಬಹುದೆಂದು ಅಭಿಪ್ರಾಯವು. ಈ ಅಭಿಪ್ರಾಯವುಳ್ಳ ಮನುಸ್ಮೃತಿ ಶ್ಲೋಕವನ್ನೂ ಸಹಾ ಮೊದಲೇ ಉದಹರಿಸಿ ಇದೆ.

ಆಶ್ವಲಾಯನಃ

ಕನ್ಯಾ ದ್ವಾದಶವರ್ಷಾಣಿ ಯಾಪ್ರದತ್ತಾವ

ಸೇದ್ಗೃಹೆ । ಬ್ರೂಣಹತ್ಯಾಪಿತುಸ್ತಸ್ಯಾಸ್ಸಾ

ಕನ್ಯಾವರಯೇತ್ಸ್ವಯಂ । ಏವಂಚೋಢನ

ತಾಂಪತ್ನೀಂ ನಾವಮನ್ಯೇತ ಕದಾಚನ ॥

೧೨ ವರ್ಷದ ವಳಗಾಗಿ ( ಅಂದರೆ ರಜಸ್ವಲೆಯಾಗುವದರ ವಳಗಾಗಿ ) ಸ್ತ್ರೀಯರಿಗೆ ವಿವಾಹವನ್ನು ಖಂಡಿತವಾಗಿ ಮಾಡಬೇಕು. ಹಾಗೆ ತಂದೆಯು ಮಾಡದೆ ಹೋದರೆ ಕನ್ಯೆಯು ಅನುರೂಪನಾದ ಪತಿಯನ್ನು ಸ್ವಯಂವರಿಸಬೇ

ಕೆಂತಲೂ, ಹಾಗೆ ವರಿಸುವ ಕನ್ನಿಕೆಯುನ್ನು ಯೂವ ವರನು ರಜಸ್ವಲೆಯೂದವಳು ವಿವಾಹಕ್ಕೆ ಅನರ್ಹಳೆಂದು ತಿರಸ್ಕಾರ ಮಾಡಕೊಡದೆಂದೂನೂ ಅಭಿಪ್ರಾಯವು.

ರಜಸ್ವಲಾಯಾಃ ಕನ್ಯಾಯಾಃ ಗುರುಶುದ್ಧಿಂನ
ಚಿಂತಯೇತ್ ||

ರಜಸ್ವಲೆಯೂದ ಕನ್ನಿಕೆಗೆ ವಿವಾಹಮಾಡಬೇಕಾದರೆ, ಗುರು ಶುದ್ಧಿಯನ್ನು ನೋಡಬೇಕಾದ ಅವಶ್ಯಕವಿಲ್ಲವೆಂದುಅರ್ಥವು.

ಭಾರತೆ :—

ತ್ರಿಂಶದ್ವರ್ಷಷೋಡಶಾಬ್ದಾಂ ಭಾರ್ಯಾಂ
ವಿಂದೇತನಗ್ನಿಕಾಂ ||

೩೦ ವರ್ಷದವನು ವಿವಾಹಿತಲ್ಲಾಗದೆ ಇರುವ ೧೬ ವರ್ಷದ ಕನ್ನಿಕೆಯುನ್ನು ವಿವಾಹಮಾಡಿಕೊಳ್ಳಬೇಕೆಂದು ಅರ್ಥವು.

ವೈದಿಕಸಾರ್ವಭೌಮಃ.

ಕನ್ಯಾದಾನೆಕಾಲಾವಧಿತ್ವಭಾವೋನಕಾರ್ಯಃ ||

ಕನ್ಯಾದಾನಮಾಡತಕ್ಕ ವಿಷಯದಲ್ಲಿ ಕಾಲನಿಯಮವನ್ನು ಇಟ್ಟುಕೊಳ್ಳದೆ ವಿದ್ಯಾ ಮುಂತಾದ ಗುಣಗಳಿಂದ ಸಂಪನ್ನ ನಾದ ೩೦ ವರ್ಷಕ್ಕೆ ಮೇಲ್ಪಟ್ಟ ವಯಸ್ಕನಾದ ವರನು

ದೊರೆತ ತತ್ಕ್ಷಣದಲ್ಲಿಯೇ ವಿವಾಹಮಾಡಬೇಕೆಂದು ಅಭಿಪ್ರಾಯವು. ಈ ಮೇಲ್ಕಂಡ ಧರ್ಮಶಾಸ್ತ್ರವಚನಗಳನ್ನು ಚನ್ನಾಗಿ ಪರ್ಯಾಲೋಚಿಸಿ ನೋಡಿದರೆ ೨೦ ವರ್ಷಕ್ಕೆ ಮೇಲ್ಪಟ್ಟ ವಯಸ್ಕನಾದ ಪುರುಷನಿಗೂ ೧೦ ವರ್ಷದಿಂದ ಪ್ರಾರಂಭಿಸಿ ರಜಸ್ವಲೆಯಾಗುವ ಪರ್ಯಂತರ ಸ್ತ್ರೀಯರಿಗೂ ವಿವಾಹಮಾಡುವದರಲ್ಲಿ ಯಾವ ಸಂಶಯವೂ ತೋರುವದಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ಪ್ರಮಾಣಗಳೆಲ್ಲವೂ ಬ್ರಾಹ್ಮಣೇತರರಿಗೆಂದು ಹೇಳಲು ಯಾವ ಆಧಾರವೂ ತೋರುವದಿಲ್ಲವೆಂದು ನಿಶ್ಚಯವಾಗಿಹೇಳಬಹುದು

ಈ ಪ್ರಕಾರವಾಗಿ ನಿರ್ಬಂಧಪಡಿಸುವದ್ದರಿಂದ ನಮ್ಮ ಮಹಾರಾಜರ ಕೋರಿಕೆಗಳೆಲ್ಲಾ ನೆರವೇರಿ ರಾಜ್ಯಕ್ಕೆ ಕ್ಷೇಮ ಉಂಟಾಗುವದಲ್ಲದೆ ಶಾಸ್ತ್ರಸಮ್ಮತವಾಗಿ ಪ್ರಜಾಪರಿಪಾಲನಮಾಡುವದರಿಂದುಂಟಾಗುವ ಯಶಸ್ಸಿಗೆ ಪಾತ್ರರಾಗುವದರಲ್ಲಿ ಯಾವ ಸಂಶಯವೂ ಇರಲಾರದು. ನಮ್ಮ ಆರ್ಯರ ಧರ್ಮಗಳೆಲ್ಲವೂ ಬಹಳ ಜಾಗ್ರತೆಯಾಗಿ ಅಭಿವೃದ್ಧಿಗೆ ಬರುವದಕ್ಕೆ ಇದೇ ಮುಖ್ಯಕಾರಣವಾಗಿಧೆಯೆಂದು ಹೇಳಬಹುದು. ಇದು ಉತ್ತಮಪಕ್ಷವಾಗಿಧೆ.

ಸ್ತ್ರೀಯರಿಗೆ ೮ ವರ್ಷವೇ ನಿಶ್ಚಯಿಸಿ ಪುರುಷರಿಗೆ ೨೦ ವರ್ಷಗಳು ನಿಶ್ಚೈಸುವದು ಅಧಮಪಕ್ಷವಾಗಿಧೆಎನ್ನು ಹೇಳಬಹುದು. ಮುಖ್ಯವಾಗಿ ೨ ಪಕ್ಷದಲ್ಲಿಯೂ ಪುರುಷರಿಗೆ ೨೦ ವರ್ಷಗಳ ಮೇಲ್ಪಟ್ಟು ವಿವಾಹಮಾಡುವದೆ ಮೇಲ್ಕಂಡವಿಷಯಗಳೆಲ್ಲಾ ಚೆನ್ನಾಗಿ ವಿಚಾರಮಾಡಿದವರಿಗೆ ಸಮ್ಮತೆವಾಗಿರಬಹುದೆಂಬುವದೇ ನಮ್ಮ ಅಭಿಪ್ರಾಯವಾಗಿಇರುತ್ತೆ.

೩೦ ವರ್ಷದಲ್ಲಿ ೧೮ ವರ್ಷದ ಸ್ತ್ರೀಯನ್ನು ವಿವಾಹಮಾಡಿಕೊಳ್ಳುವ ವಿಷಯವು ವಿಚಾರ್ಯಮಾಣವಾದ್ದೆ ಅಲ್ಲವೆಂದು ಹೇಳಬಹುದಾಗಿ ತೋರುತ್ತೆ.

೫೦ ವರ್ಷಗಳಾದ ನನ್ತರ ವಿವಾಹಮಾಡಿಕೊಳ್ಳಬಾರದೆಂಬುವದರಲ್ಲಿ ಪ್ರಮಾಣವನ್ನು ವಿಚಾರಮಾಡೋಣ:—

ಪಂಚಾಶದ್ವತ್ಸರಾದೂರ್ಧ್ವಂ ನಕಾರ್ಯಂ
ಪಾಣಿಪೀಡನಂ । ಕಲೇರ್ಯುಗಸ್ಯದುಷ್ಟತ್ವಾ
ತ್ಪ್ರಾಯೋವ್ಯಾಕುಮರ್ಗಿಣೀ । ಯುವಾ
ನಂಪ್ರೇಕ್ಷತೆನಾರಿ ಸ್ವಯಂಜೀರ್ಣಪಿಸರ್ವದಾ ।
ವ್ಯಭಿಚಾರಾತ್ಕುಲಂನಶ್ಯೇತ್ಕುಲನಾಶಾತ್ಕು
ಲಾಂಗನಾಃ । ಭ್ರಶ್ಯನ್ತಿಸಂಕರೋಭೂಯಾ
ತ್ಸಂಕರೋ ನರಕಾಯಚ ॥

ಸ್ತ್ರೀಯರಿಗೆ ಪುರುಷಸಂಪರ್ಕವೇ ಮುಖ್ಯವಾದ್ದರಿಂದ ೫೦ ವರ್ಷದವನು ವಿವಾಹಮಾಡಿಕೊಂಡರೆ ಅಶಕ್ತನಾದ ಪತಿಯನ್ನು ತಿರಸ್ಕರಿಸಿ ವ್ಯಭಿಚಾರದಿಂದ ಪುತ್ರರನ್ನು ಪಡೆಯುತ್ತಾರೆಂತಲೂ, ಅಂಥಾ ದುಷ್ಟಪುತ್ರರಿಂದ ಲೋಕಕ್ಕೆ ಅನೇಕ ಅನರ್ಥಗಳು ಸಂಭವಿಸುತ್ತವೆಂತಲೂ ಮುಖ್ಯ ತಾತ್ಪರ್ಯವು; ಇದರಿಂದ ಅಶಕ್ತರಾಗಿ ದೇಹವನ್ನು ಸರಿಯಾಗಿ ಕಾಪಾಡಿಕೊಳ್ಳದೆ ಇರುವವರು ವಿವಾಹವನ್ನು ಮಾಡಿಕೊಳ್ಳಕೂಡದೆಂದು ನಿರ್ಣಯಿಸಬೇಕಾಗಿದೆ. ಇದಲ್ಲದೆ ೫೦ ವರ್ಷದವರು ಬಹಳ ಕಾಮಪುಷ್ಟಿಯುಳ್ಳವರಾಗಿ, ಪೂರ್ವವಯಸ್ಕರಲ್ಲಿಯೇ ಅನೇಕರು ಅಶಕ್ತರಾಗಿಯೂ ಇರುತ್ತಾ ಇರುವದು ದೃಷ್ಟಾಂತವಾಗಿದೆ. ಆದಕಾರಣ ಎಸೇ ವಿವಾಹಮಾಡಿಕೊಳ್ಳುವ ಪುರುಷನು ಇಂಗ್ಲೀಷ್ ವೈದ್ಯರಿಂದಲಾಗಲಿ ಅಥವಾ ನೇಟೀವ್ ವೈದ್ಯರಿಂದಲಾಗಲಿ ವಿವಾಹಮಾಡಿಕೊಳ್ಳಲು ಅರ್ಹನೆಂದು ಯೋಗ್ಯತಾಪತ್ರಿಕೆಯನ್ನು ಪಡೆಯಬೇಕೆಂದೂನೂ ಮತ್ತು ವಂಶಕ್ಕೆ ಪುತ್ರರಿಲ್ಲದಕಾರಣವಾಗಲಿ ಅಥವಾ ಯೌವ್ವನದಿಂದ ಮಾಡಿಕೊಳ್ಳುವವನು ಇರುವ ಸಂಸಾರಕ್ಕೂ ಬರುವಸಂಸಾರಕ್ಕೂ ಪರಸ್ಪರ ಸಂಬಂಧವಿಲ್ಲದೆ

ಕಾಪಾಡುವ ಶಕ್ತಿಯನ್ನು ಇವೇ ಮುಂತಾದ ಕಾರಣಗಳನ್ನು ಗೌರ್ನಮೆಂಟಿನವರಿಗೆ ಸಮರ್ಪಕವಾಗುವ ಹಾಗೆ ತೋರಿಸಿದರೆ ಎರಡನೇ ವಿವಾಹಮಾಡಿಕೊಳ್ಳಬಹುದೆಂದು ಏರ್ಪಡಿಸಿದರೆ ಈಗ ದೇಶದಲ್ಲಿ ಸ್ತ್ರೀಪುರುಷರಿಗೆ ಉಂಟಾಗಿರುವ ಸಮಸ್ತ ಅನರ್ಥಗಳು ನಿವಾರಣೆಯಾಗಿ ದೇಶಕ್ಕೆ ಅಪೂರ್ವವಾದ ಒಂದು ಕ್ಷೇಮವುಂಟಾಗಿ ಯುಗಾನ್ತರದಲ್ಲಿದ್ದ ರಾಜರುಗಳ ಯಶಸ್ಸಿನಂತೆ ಶ್ರೀಮನ್ಮಹಾರಾಜರವರಿಗೆ ತುಂಬಾ ಯಶಸ್ಸುಂಟಾಗುವದರಲ್ಲಿ ಯೇನೂ ಸಂಶಯವಿಲ್ಲವೆಂದು ಹೇಳಬಹುದಾದಕಾರಣ ಮೇಲ್ಕಂಡ ವಿಷಯಗಳೆಲ್ಲಾ ಪರ್ಯಾಲೋಚನೆಗೆ ತರಬೇಕೆಂದು ಅತಿವಿನಯವಾಗಿ ಪ್ರಾರ್ಥಿಸುತ್ತಾ ಇರುವ ತಮ್ಮಗಳ ವಿಧೇಯನಾದ;

ಕಾಕೋಳು, ತಿರುಮಲೆ

ಶ್ರೀನಿವಾಸದೇಶಿಕಾಚಾರ್ಯ,

ಮೈಸೂರು.

